


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 05-03-2021 ಪ್ರಶ್ನೆ ಸಂಖ್ಯೆ : 620 (740)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 05-03-2021

ಉತ್ತರಿಸುವ ಸಚಿವರು: ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ವಿಷಯ : ವಿಕಲ ಚೇತನರ ಕಲ್ಯಾಣದ ಯೋಜನೆ ಮಾರ್ಗಸೂಚಿಯ ಷರತ್ತುಗಳ ಕುರಿತು

(ಅ) ವಿಕಲಚೇತನ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ವಿವಿಧ ಯೋಜನೆಗಳು ಯಾವುವು ; ಅವುಗಳ ಮಾರ್ಗಸೂಚಿಗಳು ಯಾವುವು ; (ಮಾರ್ಗಸೂಚಿಯ ಪ್ರತಿಯನ್ನು ಒದಗಿಸುವುದು)

(ಆ) ಕಠಿಣ ಮಾರ್ಗಸೂಚಿ ಮತ್ತು ಫಲಾನುಭವಿಗಳ ಕೊರತೆಯಿಂದ ವಿವಿಧ ಇಲಾಖೆಗಳಲ್ಲಿ ವಿಕಲಚೇತನರ ಕಲ್ಯಾಣಕ್ಕಾಗಿ ಮೀಸಲಿಟ್ಟ ಅನುದಾನವು ಖರ್ಚಾಗದೇ ಬಾಕಿ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮವೇನು ;

(ಇ) ವಿಕಲಚೇತನರಿಗೆ ಅತೀ ಅಗತ್ಯವಾದ ಯಂತ್ರಚಾಲಿತ ದ್ವಿಚಕ್ರ, ಯಾಂತ್ರಿಕ ಶ್ರವ್ಯ ಸಾಧನದಂತಹ ಸೌಲಭ್ಯ ಪಡೆಯಲು ಅನುಕೂಲವಾಗುವಂತೆ ವಿಕಲಚೇತನರ ಯೋಜನೆ ಮಾರ್ಗಸೂಚಿಯಲ್ಲಿ ಸಡಿಲತೆಯನ್ನು ತರುವ ಉದ್ದೇಶ ಸರ್ಕಾರದ ಮುಂದಿದೆಯೇ ; ಈ ಬಗ್ಗೆ ಸರ್ಕಾರದ ಕ್ರಮವೇನು ?